# ಲೇಖಕರಾಗಿ ಮಕ್ಕಳು, ಸಂಪಾದಕರು ಅಥವಾ ವಿಮರ್ಶಕರಾಗಿ ಶಿಕ್ಷಕರು

***ಆಕಾರ್*, ಸಂಚಿಕೆ 37.**

**ಪರಿಶೀಲನೆ: ಸ್ನೇಹಲತಾ ಗುಪ್ತ**

ಒಬ್ಬ ಭಾಷಾ ಶಿಕ್ಷಕಳಾಗಿ ಮಕ್ಕಳಿಗೆ ಬರೆಯಲು ಬರದಿರುವ ಬಗ್ಗೆ ಸುಮಾರು ಬಾರಿ ಗೋಳಾಡಿದ್ದಿದೆ. ಬರೆಯಲು ಮನಸ್ಸೇ ಇಲ್ಲದ ಮಕ್ಕಳೊಡನೆ ವ್ಯವಹರಿಸುವ ನನ್ನ ದುರ್ವಿಧಿಯ ಬಗೆಗೂ ಬೇಸರ ವ್ಯಕ್ತಪಡಿಸಿದ್ದಿದೆ. ಆ ಮಕ್ಕಳ ಬರವಣಿಗೆಯ ಮನೆಗೆಲಸವನ್ನು "ತಿದ್ದುವ" ಹೊಣೆ ಹೊತ್ತುಕೊಂಡು ಬೇಸರ ಮೂಡಿಸುವ ನೀರಸವಾದ ಪಾಠಗಳನ್ನು ಓದುವ ಈ ಶಿಕ್ಷೆಯ ಮೂಲ ಕಾರಣ ಮಕ್ಕಳ ಅಸಾಮರ್ಥ್ಯವೋ ಅಥವಾ ಪ್ರೇರಣೆಯ ಕೊರತೆಯೋ ಎಂಬ ಯೋಚನೆಗೀಡಾಗುತ್ತಿದ್ದೆ. ಆದರೆ ಅದರ ಮೂಲ ಕಾರಣ ಶಾಲೆಯಲ್ಲಿನ ಬರವಣಿಗೆ ಅಭ್ಯಾಸಗಳ ಬೋಧನಾ ವಿಧಾನ ಎಂದು ಮಾತ್ರ ನಿಜವಾಗಿಯೂ ಅಂದುಕೊಂಡಿರಲಿಲ್ಲ. ಉಪಾಖ್ಯಾನ ಪುರಾವೆಗಳ ಪ್ರಕಾರ ಇದು ನನ್ನೊಬ್ಬಳ ಗೊಂದಲವಲ್ಲ. ಕೆಲವು ಅತ್ಯುತ್ತಮ ಪರ್ಯಗಳು ಪ್ರಕಾಶಮಾನವಾಗಿ ಬೆಳಗಿವೆ ಎಂಬುದು ನಿಜ, ಆದರೆ ಅವು ಕೇವಲ ಉಲ್ಕಾಪಾತಗಳಾಗಿವೆಯಷ್ಟೇ - ಅಮೂಲ್ಯ ಆದರೆ ಅಪರೂಪ.

ಇಲ್ಲಿ ಹಿಂದಿ ಸಾಹಿತ್ಯ ನಿಯತಕಾಲಿಕೆಯಾದ ಆಕಾರ್ ನ ವಿಶೇಷ ಸಂಚಿಕೆಯ (ಸಂಖ್ಯೆ ೩೭) ಲೇಖನಗಳನ್ನು ಪರಿಶೀಲಿಸಲಾಗಿದೆ. ಈ ಸಂಚಿಕೆಯಲ್ಲಿ ದೆಹಲಿಯ ಪುನರ್ವಸತಿಯ ಬಡಾವಣೆಯೊಂದಕ್ಕೆ ಸೇರಿದ ೧೮ ಲೇಖಕರನ್ನು ವಿಶೇಷವಾಗಿ ಪರಿಚಯಿಸಲಾಗಿದೆ. ಲೇಖಕರು ೯ ರಿಂದ ೧೨ನೇ ತರಗತಿಯವರೆಗೆ ಓದುತ್ತಿರುವ ೧೪-ರಿಂದ ೧೮ರ ವಯೋಮಿತಿಯೊಳಗೆ ಬರುವ ಸ್ಥಳೀಯ ಸರ್ಕಾರೀ ಶಾಲೆಯ ಮಕ್ಕಳು. ಈ ಮಕ್ಕಳು ಅಂಕುರ್ ಸೊಸೈಟಿ ಫಾರ್ ಆಲ್ಟರ್ನೇಟಿವ್ಸ್ ಇನ್ ಎಜುಕೇಶನ್ ಎಂಬ ಸಂಸ್ಥೆ ಕಳೆದ ೫ರಿಂದ ೭ ವರ್ಷಗಳಿಂದ ಆಯೋಜಿಸುತ್ತಾ ಬಂದಿರುವ ಬರವಣಿಗೆಯ ಅಭ್ಯಾಸಗಳಲ್ಲಿ ತೊಡಗಿಸಿಕೊಂಡು ತಯಾರಾದವರು.

ಈ ಸಂಚಿಕೆಯ ಪೀಠಿಕೆಯಲ್ಲಿ , ಆಕಾರ್ ನ ಸಂಪಾದಕರಾದ ಪ್ರಿಯಂವದ್ ಅವರು ಈ ಯುವ ಲೇಖಕರೊಡನೆಯ ತನ್ನ ಭೇಟಿಯ ಬಗ್ಗೆ ಕೆಲವು ವಿಚಾರವನ್ನು ಹಂಚಿಕೊಳ್ಳುತ್ತಾರೆ. ಈ ಮಕ್ಕಳು

ಕಥೆಗಳನ್ನು ಬರೆಯುವ ಪ್ರಕ್ರಿಯೆಯಲ್ಲಿ ಎದುರಿಸಿದ ಸಮಸ್ಯೆಗಳು ಭಾಷೆ, ಧ್ವನಿ ಹಾಗು ಅನುಭವಗಳಿಗೆ ಸಂಬಂಧಿಸಿದ್ದಾಗಿರಲಿಲ್ಲ ಎಂದು ಅವರು ದೃಢೀಕರಿಸುತ್ತಾರೆ. ಬದಲಿಗೆ ಸಂಪಾದಕರೊಡನೆ ಈ ಎಳೆಯ ಲೇಖಕರು ಇಟ್ಟ ಪ್ರಶ್ನೆಗಳು - "ನಿರೂಪಣೆಯನ್ನು ಮುಂದಕ್ಕೆ ತೆಗೆದುಕೊಂಡು ಹೋಗುವುದು ಹೇಗೆ?" "ಕಥೆಯನ್ನು ಮುಗಿಸುವ ಬಗೆ ಹೇಗೆ?" " ಒಂದು ಪಾತ್ರವನ್ನು ಕಥೆಯುದ್ದಕ್ಕೂ ಬೆಳೆಸಿಕೊಂಡು ಹೋಗುವ ರೀತಿ ಹೇಗಿರಬೇಕು?" ಇಂಥವೇ ಆಗಿದ್ದವು. ಒಬ್ಬ ಅಕ್ಷರಸಾಲಿಯಂತೂ ಕಥೆಯನ್ನು ಕಾದಂಬರಿಯನ್ನಾಗಿಸುವುದು ಹೇಗೆ ಎಂಬ ಸವಾಲಿನೊಂದಿಗೆ ಹೆಣಗಾಡುತ್ತಿದ್ದ.

ಆಕಾರ್ ನ ಈ ವಿಶೇಷ ಸಂಚಿಕೆಯಲ್ಲಿ ಪ್ರತಿಯೊಬ್ಬ ಎಳೆ ಲೇಖಕನೂ/ಕಿಯೂ "ಮನದ ಡೈರಿಯೊಳಗಿಂದ" ಎಂಬ ಆತ್ಮಕಥನಾತ್ಮಕ ನಿರೂಪಣೆಯೊಂದನ್ನು ಹಂಚಿಕೊಳ್ಳುತ್ತಾನೆ/ಳೆ. ಅದಾದ ಮೇಲೆ ತನ್ನದೇ ಆದ ಕಥೆ ಅಥವಾ ಕಥೆಗಳ ಪ್ರಸ್ತುತಿ. ಈ ವೈಯಕ್ತಿಕ ಟಿಪ್ಪಣಿಯು (“ಮನದ ಡೈರಿಯೊಳಗಿಂದ”) ತಾವೇಕೆ ಬರೆಯುತ್ತೇವೆ, ಲೇಖಕರಾಗಿ ತಮ್ಮ ಬಗೆಗೆ ತಮಗಿರುವ ಗ್ರಹಿಕೆ, ಬರವಣಿಗೆಗೆ ತಾವು ಆರಿಸಿಕೊಂಡ ವಿಷಯ, ಕಥೆಯು ಸುತ್ತುವ ಮುಖ್ಯ ಪಾತ್ರದ ಪುಟ್ಟ ವ್ಯಕ್ತಿಚಿತ್ರ ಇಂಥ ವಿಷಯಗಳ ಬಗ್ಗೆ ಲೇಖಕರು ಓದುಗರೊಡನೆ ನಡೆಸುವ ಸಂವಾದದ ಅಭಿವ್ಯಕ್ತಿಯಂತೆ ಇದೆ.

ವೈಯಕ್ತಿಕ ಸಂವಾದದ ನಂತರ ಬರುವ ಕಥೆಗಳು ಪರಿಚಿತವಾದರೂ ವಿಚಿತ್ರವಾದ ಒಂದು ಜಗತ್ತನ್ನು ಕಟ್ಟಿಕೊಡುತ್ತವೆ. ಆ ಕಥೆಗಳೆಲ್ಲ ಪುನರ್ವಸತಿ ಬಡಾವಣೆಯಲ್ಲಿ ನಡೆಯುವ ಸನ್ನಿವೇಶಗಳು ಮತ್ತು ಪಾತ್ರಗಳ ಸುತ್ತಲೇ ಜರುಗುತ್ತವೆ. ಆದರೆ ವಿಷಯವಸ್ತುವನ್ನು ಚಿತ್ರಿಸುವ ರೀತಿಯಿಂದಾಗಿ ಈ ಕಥೆಗಳು ವಿಶಿಷ್ಟವೆನಿಸುತ್ತದೆ. ಅವುಗಳಿಂದಾಗಿ ಅಲ್ಲಿನ ಜನ, ದೃಶ್ಯ - ಧ್ವನಿ ಹಾಗೂ ಸಾಮಾನ್ಯ ಸ್ಥಳವೊಂದರಲ್ಲಿ ಹಾಸುಹೊಕ್ಕಾಗಿರುವ ನಾಟಕೀಯ ಘಟನಾವಳಿಗಳ ಮರುಸೃಷ್ಟಿಯಿಂದಾಗಿ ಆ ಸ್ಥಳ ಓದುಗರ ಮನದಲ್ಲಿ ವಿಶೇಷವಾಗಿ ಮಿಡಿಯಲು ತೊಡಗುತ್ತದೆ.

ಮಣ್ಣಿನ ಆಟಿಕೆಗಳನ್ನು ಮಾಡುವ ಭಯಾನಕ ಅಜ್ಜಿ "ಖಿಲೋನೇ ಬನಾನೇ ವಾಲೀ ಡಾನ್"; ಹಾಡುವ ಸಾಮರ್ಥ್ಯದೊಂದಿಗೆ ವಿವಿಧ ಸಮಾರಂಭಗಳಲ್ಲಿ ಮನರಂಜನೆಯನ್ನೂ ನೀಡುತ್ತಿದ್ದ ಬಹು ಬೇಡಿಕೆಯಲ್ಲಿರುವ ಹುಡುಗನ ಕಥೆ-"ದೇಸಿ ಸೆಲೆಬ್ರಿಟಿ"; ಪಕ್ಕದ ಉದ್ಯಾನವೊಂದರ ಗೋಡೆಗೆ ಕಟ್ಟಿದ ತಾಡಪತ್ರೆಯ ಮನೆ "ಮೇರಾ ಬೆಹರೂಪಿಯಾ ಘರ್"; ಮಂಗಳಮುಖಿಯೊಬ್ಬರ ಬದುಕು "ಕಿನ್ನರ್"-ಹೀಗೆ ಈ ಕಥೆಗಳು ವರ್ಗೀಕರಣವನ್ನು ಅಲ್ಲಗಳೆಯುತ್ತವೆ. ಮಕ್ಕಳಿಂದ

ಬರೆಯಲ್ಪಟ್ಟಿದ್ದರೂ ಈ ಕಥೆಗಳು ಅಷ್ಟು ಸುಲಭವಾಗಿ ಮಕ್ಕಳ ಸಾಹಿತ್ಯದ ಶೈಲಿಗೆ ಒಗ್ಗಿಕೊಳ್ಳುವುದಿಲ್ಲ. ಈ ಕಥೆಗಳು ಕಥೆಗಾರರ ಸಾಂದರ್ಭಿಕ ಹಿನ್ನೆಲೆಯಲ್ಲಿ ಬೇರೂರಿಕೊಂಡಿದ್ದರೂ ಅದರ ಮಿತಿಯೊಳಗೇ ಮುದುರಿಕೊಂಡಿಲ್ಲ. ಈ ಬರಹಗಳಿಗೆ ಒಂದು ರೀತಿಯ ವೃತ್ತಿಪರ ಪ್ರಬುದ್ಧತೆ ಇರುವುದರಿಂದಲೇ ಇವುಗಳಿಗೆ ಸಾಹಿತ್ಯ ನಿಯತಕಾಲಿಕೆಯಲ್ಲಿ ಸ್ಥಾನ ದಕ್ಕಿದೆ.

ನನ್ನ ಭಾಷಾ ತರಗತಿಯಲ್ಲಿ ಕಲಿಯುವ ಮಕ್ಕಳಿಂದ ಒಂದು ದಿನವೂ ಇಂಥ ಗುಣಮಟ್ಟದ ಬರೆಹಗಳನ್ನೇಕೆ ತೆಗೆಸಲಾಗಲಿಲ್ಲ? ಸಾಹಿತ್ಯ ಪ್ರತಿಭೆಯ ಈ ಮಹಾಪೂರದಲ್ಲಿ ಒಬ್ಬ ಭಾಷಾ ಶಿಕ್ಷಕಿಗೆ ಅದ್ಯಾವ ಪಾಠ ಹುದುಗಿದೆ? ನನ್ನದೇ ವಿದ್ಯಾರ್ಥಿಗಳ ವಯಸ್ಸಿಗೆ ಸೇರಿದ, ಅವರಂಥದ್ದೇ ಹಿನ್ನೆಲೆಯಿಂದ ಬಂದಂಥ (ನಾನು ಸರ್ಕಾರೀ ಶಾಲೆಯೊಂದರಲ್ಲಿ ಕಲಿಸುತ್ತೇನೆ ) ಈ ಯುವ ಬರಹಗಾರರ ಕಥೆಗಳನ್ನು ಒಂದೊಂದಾಗಿ ಓದುತ್ತಾ ಹೋದಂತೆ ನನ್ನ ಮನದಲ್ಲಿ ಹಲವಾರು ಪ್ರಶ್ನೆಗಳು ಪುಟಿಯತೊಡಗಿದವು .

ಅಂಚಿಗೆ ತಳ್ಳಲ್ಪಟ್ಟ ವರ್ಗಗಳ ಹಿನ್ನೆಲೆಯಿಂದ ಬಂದ ಮಕ್ಕಳಿಗೆ ಹೇಳಲು ಕಥೆಗಳೇ ಇರುವುದಿಲ್ಲ, ಇದ್ದರೂ ಅವರಿಗೆ ಹೇಳಲು ಸಾಧ್ಯವಿಲ್ಲ ಎಂಬ ಸಾಮಾನ್ಯ ನಂಬಿಕೆ ಎಲ್ಲ ಶಿಕ್ಷಕರಲ್ಲಿರುತ್ತದೆ. ಅವರು ಆರ್ಥಿಕವಾಗಿ ಹಿಂದುಳಿದ ಹಿನ್ನೆಲೆಯಿಂದ ಬಂದಿದ್ದರಿಂದ ಅವರ ಬದುಕಿನಲ್ಲಿ ಅರ್ಥಪೂರ್ಣವಾದದ್ದಾಗಲೀ, ವರ್ಣಮಯ ಸಂಗತಿಗಳಾಗಲೀ ಇರಲು ಶಕ್ಯವೇ ಇಲ್ಲ ಎಂಬುದು ಅವರ ನಂಬಿಕೆ. ಒಬ್ಬ ಶಿಕ್ಷಕಳಾಗಿ ನನ್ನ ವಿದ್ಯಾರ್ಥಿಗಳ ಸೂತ್ರಬದ್ಧವಾದ, ಕಲ್ಪನಾರಹಿತ ಹಾಗು ಮಬ್ಬು ಬರಹಗಳಿಂದ ಹಲವು ಬಾರಿ ರೋಸಿಹೋದದ್ದಿದೆ. ಕೆಲವು ಸಂದರ್ಭಗಳಲ್ಲಿ ನಾನೂ ಕೂಡ (ಒಪ್ಪಿಕೊಳ್ಳಲೇಬೇಕು) ಈ ಮಕ್ಕಳ ಹಿನ್ನೆಲೆಯ ಕಾರಣದಿಂದ ಇವರಿಗೆ ಭಿನ್ನವಾಗಿ ಯೋಚಿಸಲೂ, ಬರೆಯಲೂ ಸಾಧ್ಯವೇ ಆಗುವುದಿಲ್ಲವೇ ಎಂಬ ಗೊಂದಲಕ್ಕೆ ಬಿದ್ದದ್ದಿದೆ.

ಆಕಾರ್ ನ ಈ ಸಂಚಿಕೆಯಲ್ಲಿ ಬಂದ ಎಳೆಯವರಾದರೂ ಪ್ರಬುದ್ಧರಾದ ಅಭ್ಯಾಸಿಗಳ ಬರಹಗಳು ಹೊಸ ಭರವಸೆ ಮೂಡಿಸುವುದಷ್ಟೇ ಅಲ್ಲ ನಾವು ಮುಂದೆ ಹಿಡಿಯಬೇಕಾದ ಹಾದಿಯನ್ನೂ ತೋರಿಸಿಕೊಡುತ್ತವೆ. ಕಡೆಗೂ ನಾವೇಕೆ ನಮ್ಮ ಮಕ್ಕಳಿಗೆ ಬರವಣಿಗೆಯನ್ನು ಕಲಿಸುತ್ತೇವೆ, ಅವರ ಬರವಣಿಗೆಯ ಕೌಶಲ್ಯವನ್ನಿಟ್ಟುಕೊಂಡು ಏನು ಸಾಧಿಸಬೇಕೆಂದು ಬಯಸುತ್ತೇವೆ, ಅವರಿಂದ ಯಾವ ರೀತಿಯ ಬರಹವನ್ನು ನೋಡಲು ಇಚ್ಛಿಸುತ್ತೇವೆ? ಎಂಬ ಪ್ರಶ್ನೆಗಳನ್ನು ಶಿಕ್ಷಕರಾಗಿ ನಾವು ನಮಗೇ ಕೇಳಿಕೊಳ್ಳಬೇಕಿದೆ. ಓದುಗರನ್ನು ರಂಜಿಸಿ, ಅವರ

ಆಸಕ್ತಿಯನ್ನು ಹಿಡಿದಿಟ್ಟು, ಅವರ ಅವಲೋಕನದ ಪರಿಧಿಯನ್ನು ವಿಸ್ತರಿಸುವಂತಹ ವೈವಿಧ್ಯಮಯವಾದ ಸಾಹಿತ್ಯಿಕ ಅನುಭವಗಳನ್ನು ಸೃಷ್ಟಿಸುವ ಬಯಕೆ, ಸಾಧ್ಯತೆ ಮತ್ತು ಕೌಶಲ್ಯವನ್ನು ನಮ್ಮ ವಿದ್ಯಾರ್ಥಿಗಳು ಪಡೆದುಕೊಳ್ಳಲಿ ಎಂಬ ಆಶಯವನ್ನು ನಾವು ಇಟ್ಟುಕೊಂಡರೆ, ಆಗ ಒಬ್ಬ ಶಿಕ್ಷಕರಾಗಿ ನಾವು ನಮ್ಮ ಕರ್ತವ್ಯವನ್ನು ಸರಿಯಾಗಿ ಮಾಡುತ್ತ ಇದ್ದೇವೆ ಎಂದೇ ಅರ್ಥ.

ಶಾಲೆಯ ಸಂದರ್ಭವನ್ನೇ ತೆಗೆದುಕೊಂಡರೆ ಈ ಯುವ ಬರಹಗಾರರ ಬರಹಕ್ಕೂ ನಮ್ಮ ಶಾಲೆಯ ವಿದ್ಯಾರ್ಥಿಗಳ ಬರಹಕ್ಕೂ ಹಾಗಾದರೆ ಏನು ವ್ಯತ್ಯಾಸ? ಈ ಯುವ ಬರಹಗಾರರು ಐದರಿಂದ-ಏಳು ವರ್ಷಗಳವರೆಗೆ ಸತತವಾಗಿ ಬರವಣಿಗೆಯ ಅಭ್ಯಾಸವನ್ನು ಮಾಡುತ್ತ ಬಂದಿದ್ದಾರೆ. ವಾರದ ಐದು ದಿನವೂ ದಿನಕ್ಕೆ ಒಂದು ತಾಸಿನಂತೆ ಬರೆಯುತ್ತಾರೆ. ತಾವು ಬರೆದಿದ್ದನ್ನು ಕೇಳಿಸಿಕೊಂಡು, ಅಭಿಪ್ರಾಯ ಹೇಳಿ, ಪ್ರಶ್ನಿಸಿ ಹಾಗು ವಿಮರ್ಶಿಸುವಂತಹ ತಮ್ಮದೇ ವಾರಿಗೆಯ ಗುಂಪಿನೆದುರು, ಒಂದು ಸುರಕ್ಷಿತವಾದ ಉತ್ತೇಜಕವಾದ ವಾತಾವರಣದಲ್ಲಿ ತಮ್ಮ ಲೇಖನವನ್ನು ಓದಿ ಹಂಚಿಕೊಳ್ಳುವಂತೆ ಅವರನ್ನು ಪ್ರೇರೇಪಿಸಲಾಗುತ್ತದೆ. ಈ ಬರಹಗಾರರು ತಮ್ಮ ಸುತ್ತಮುತ್ತಲಿನ ಜೀವನ, ಜನ ಹಾಗು ಜಾಗಗಳ ಬಗ್ಗೆ ಏನನ್ನು ಕಂಡು, ಕೇಳಿ ಅನುಭವಿಸುತ್ತಾರೋ ಅದರ ಬಗ್ಗೆ ಮಾತನಾಡಿ, ಹಂಚಿಕೊಂಡು ಸಂವಹಿಸಲು ಬರೆಯುತ್ತಾರೆ. ಅವರಿಗೆ ತಮಗೆಷ್ಟು ಬೇಕೋ ಅಷ್ಟು, ಎಲ್ಲಿಯವೆರೆಗೆ ಬೇಕೋ ಅಲ್ಲಿಯವೆರೆಗೆ ಬರೆಯುವ ಸಂಪೂರ್ಣ ಸ್ವಾತಂತ್ರ್ಯವಿದೆ.

ಶಾಲೆಗಳಲ್ಲಿ ಬರವಣಿಗೆಯು ಕಟ್ಟಳೆ ಮಾಡುವ ಸಂಗತಿಯಾಗಿದ್ದು ಅಲ್ಲಿ ಬರವಣಿಗೆಯ ಸ್ವರೂಪದ ಮೇಲೆ ಬಹಳ ಒತ್ತು ಕೊಡಲಾಗುತ್ತದೆ. ಬರವಣಿಗೆ ಎಂದರೆ ಬರೀ ಯಾವುದಕ್ಕೆ ಬೆಲೆ ಇದೆಯೋ, ಯಾವುದು ಪರೀಕ್ಷೆಯಲ್ಲಿ ಅಂಕ ಗಳಿಸುವುದೋ ಅಷ್ಟೇ. ಎಲ್ಲಿಯಾದರೂ ಮಕ್ಕಳಿಗೆ ತಮ್ಮ ಅನುಭವದ ಬಗ್ಗೆ ತಮ್ಮದೇ ಸ್ವಂತಿಕೆಯಿಂದ ಧ್ವನಿಯೆತ್ತಿ ಬರೆಯಲು ಅವಕಾಶವಿದ್ದರೂ ಅದು ಬಹಳ ಅಪರೂಪ. ಮಕ್ಕಳು ಸದಾ ಬರವಣಿಗೆಯ ಸ್ವರೂಪವೆಲ್ಲಿ ಹಾಳಾಗಿಬಿಡುತ್ತದೋ ಎಂಬ ಭಯದಲ್ಲೇ ಬರೆಯುತ್ತಾರೆ - ವ್ಯಾಕರಣ, ತಪ್ಪಿಲ್ಲದ ಬರವಣಿಗೆ , ಪದ ಸಂಪತ್ತು ಹಾಗೂ ಸ್ವರಚಿಹ್ನೆ ಇಂಥವುಗಳ ಬಗ್ಗೆಯೇ ಹೆಚ್ಚು ತಲೆ ಕೆಡಿಸಿಕೊಳ್ಳುತ್ತಾರೆ.

ತಮ್ಮ ವಿದ್ಯಾರ್ಥಿಗಳಿಂದ ಆಸಕ್ತಿಕರವಾದ ವೈವಿಧ್ಯಮಯ ಬರವಣಿಗೆಗಳನ್ನು ನಿರೀಕ್ಷಿಸುತ್ತಲೇ ಶಿಕ್ಷಕರು ಅದಕ್ಕೆ ಸಂಪೂರ್ಣ ವಿರುದ್ಧವಾದುದನ್ನು ಮಕ್ಕಳಿಗೆ ಕಲಿಸುತ್ತ ಇರುತ್ತಾರೆ.

ಎಲ್ಲೋ ಒಂದುಕಡೆ ಮಕ್ಕಳನ್ನು ಪರೀಕ್ಷೆಗಳಲ್ಲಿ ತೇರ್ಗಡೆ ಹೊಂದಿಸುವ ಗುಂಗಿನಲ್ಲಿ, ಪಠ್ಯಕ್ರಮವನ್ನು ಮುಗಿಸುವ ಪರೀಕ್ಷೆಗಳಿಗೆ ಕಲಿಸುವ ಲೆಕ್ಕಾಚಾರದಲ್ಲಿ ಶಿಕ್ಷಕರು ವಾಸ್ತವ ಜಗತ್ತಿನಲ್ಲಿ ಬರಹಗಾರರು ಏಕೆ ಬರೆಯುತ್ತಾರೆ ಎಂಬ ವಿಷಯವನ್ನೇ ಮರೆತುಹೋದಂತಿದೆ; ಓದುವುದು ಮತ್ತು ಬರೆಯುವುದಕ್ಕೆ ಶೈಕ್ಷಣಿಕ ಪಠ್ಯಕ್ರಮ ಹಾಗು ವಿಷಯಸಂಗ್ರಹದ ಸಂಕುಚಿತ ಮಿತಿಗಳನ್ನೂ  ಮೀರಿ ಒಂದು ಅರ್ಥ ಹಾಗು ಉದ್ದೇಶವಿದೆ ಎಂಬುದನ್ನೂ ಸೇರಿ. ಪರೀಕ್ಷೆಯಲ್ಲಿ ತೇರ್ಗಡೆ  ಹೊಂದುವ ಸೀಮಿತ ಉದ್ದೇಶದ  ಕಾರಣಕ್ಕಾಗಿ ಬರೆಯುವುದನ್ನು ಕಲಿಸುವುದರಿಂದ ಬರಹಗಾರರು ಹುಟ್ಟಲು ಸಾಧ್ಯವಿಲ್ಲ.

ತಲ್ಲೀನಗೊಳಿಸುವ ಹಾಗೂ ಗಮನ ಸೆಳೆಯುವ ಶೈಲಿ ಮತ್ತು ತನ್ನ ವಿಷಯ ವಸ್ತುವಿನಿಂದಾಗಿ ಆಕಾರ್ ನ ಈ ಸಂಚಿಕೆಯ ಕಥೆಗಳು ಮಕ್ಕಳು ನಿಜವಾಗಿ ಏನನ್ನು ಹಾಗು ಹೇಗೆ ಬರೆಯುವ ಸಾಮರ್ಥ್ಯವನ್ನು ಹೊಂದಿದ್ದಾರೆ ಎಂಬುದಕ್ಕೆ ಸಾಕ್ಷಿಯಾಗಿದೆ. ಸೌಕರ್ಯವಂಚಿತ  ಹಿನ್ನೆಲೆಯಿಂದ ಬಂದರೂ ಈ ಬರಹಗಾರರಿಗೆ ಪ್ರಮುಖ ಸಾಹಿತ್ಯ ನಿಯತಕಾಲಿಕೆಯೊಂದರಲ್ಲಿ ಬರೆಯಲು ಮುಕ್ತ ಅವಕಾಶ  ಸಿಗುತ್ತದೆ. ಪುನರ್ವಸತಿ ಬಡಾವಣೆಗಳಿಂದ ಬರುವ ಮಕ್ಕಳಿಗೆ ಸಮ ಪ್ರಮಾಣದಲ್ಲಿ ಮುಕ್ತತೆ ಹಾಗು ಪೂರಕ ಬೆಂಬಲವನ್ನು ದೊರಕಿಸಿಕೊಟ್ಟರೆ  ಅವರೆಲ್ಲ ಹೊಸ ಧ್ವನಿಯುಳ್ಳ ಬರಹಗಾರರಾಗಿ ಹೊರಹೊಮ್ಮಲು ಸಾಧ್ಯ  ಎಂಬುದಕ್ಕೆ ಇದಕ್ಕಿಂತ ಬೇರೆ ನಿದರ್ಶನ ಏನಿದೆ? ಮತ್ತೆ ಮಕ್ಕಳು ಬರಹಗಾರರಾಗಬಹುದಾದರೆ ಶಿಕ್ಷಕರು ಸಂಪಾದಕರ, ವಿಮರ್ಶಕರ ಪಾತ್ರ ವಹಿಸಬಹುದಲ್ಲವೇ? ಹೀಗೆ ಬುಡಮೇಲು ಮಾಡುವುದರಿಂದ ಎಂತೆಂಥ ಅದ್ಭುತ ಪ್ರತಿಭೆಗಳು ನಮಗೆ  ನೋಡಲು ಸಿಗಬಹುದು? ಈ  ನಿಯತಕಾಲಿಕೆಯಲ್ಲಿ ಬಂದ ಪ್ರತೀ ಬರಹದ ಉತ್ಕೃಷ್ಟತೆಯನ್ನು ಗಮನದಲ್ಲಿಟ್ಟುಕೊಂಡು ಒಬ್ಬ ಭಾಷಾ ಶಿಕ್ಷಕಳಾಗಿ ಬರವಣಿಗೆಯ ಕೆಲಸವನ್ನು ತಿದ್ದುವಾಗಿನ ನನ್ನ ಅನುಭವಗಳನ್ನು ಹೋಲಿಸಿಕೊಂಡರೆ ಬಹುಶಃ ನಮಗೆ ಚಿಮ್ಮುವ ತಾರೆಗಳೇ ತುಂಬಿದ ಆಕಾಶವು ಕಾಣಬಹುದೇನೋ!

**ಸ್ನೇಹಲತಾ ಗುಪ್ತ** ಅವರು ಸೂರಜ್ ಮಲ್ ವಿಹಾರ್ ನಲ್ಲಿರುವ ಎನ್ ಸಿ ಟಿ ದೆಹಲಿ ಸರ್ಕಾರದ ಶಿಕ್ಷಣ ನಿರ್ದೇಶನಾಲಯದ ಅಡಿಯಲ್ಲಿ ಬರುವ ರಾಜಕೀಯ ಪ್ರತಿಭಾ ವಿಕಾಸ್ ವಿದ್ಯಾಲಯದಲ್ಲಿ ಇಂಗ್ಲಿಷ್ ಪ್ರಾಧ್ಯಾಪಕರಾಗಿದ್ದಾರೆ. ಎಸ್ ಸಿ ಈ ಆರ್ ಟಿ , ದೆಹಲಿ ಹಾಗು ಎನ್ ಸಿ ಈ ಆರ್ ಟಿ ಯಲ್ಲಿ ಪಠ್ಯಕ್ರಮ ಅಭಿವೃದ್ಧಿ ಹಾಗು ಪಠ್ಯ ಪುಸ್ತಕ ರಚನೆಯಲ್ಲಿ ತೊಡಗಿಸಿಕೊಂಡಿದ್ದಾರೆ. ಇವರು ಪೀಯರ್ಸನ್ ಇಂಡಿಯಾ ದವರಿಗಾಗಿ ಇಂಗ್ಲಿಷ್ ಕಲಿಸುವ ಪಠ್ಯ ಪುಸ್ತಕಗಳನ್ನು ಕೂಡ ರಚಿಸಿದ್ದಾರೆ. ಶಿಕ್ಷಕ ತರಬೇತಿ ಹಾಗೂ ವಿಮರ್ಶಾತ್ಮಕ ಸಾಕ್ಷರತೆ ಹಾಗು

ಓದುವಿಕೆಯ ಶಿಕ್ಷಣದಲ್ಲಿ ಸಂಶೋಧನೆ ಇವರ ಆಸಕ್ತಿಯ ವಿಷಯಗಳು. ಯುವ ಓದುಗರಿಗೆ ಸಂತೋಷಕ್ಕಾಗಿ ಓದಲು ಸಹಾಯ ಮಾಡುವುದು ಹಾಗೂ ಯುವ ಪ್ರೌಢ ಸಾಹಿತ್ಯದಲ್ಲಿ ಕೂಡ ಆಸಕ್ತಿ ಹೊಂದಿದ್ದಾರೆ.

snehalathag@gmail.com

**ಚಿಂತನಾತ್ಮಕ ಪ್ರಶ್ನೆಗಳು:**

೧. ಪ್ರಸ್ತುತ ಲೇಖನದಲ್ಲಿ ಜನಮಾನಸದಲ್ಲಿ ಹಾಸುಹೊಕ್ಕಾಗಿರುವ ಕೆಲವು ಪೂರ್ವಗ್ರಹಗಳ ಬಗ್ಗೆ ಪ್ರಸ್ತಾಪಿಸಲಾಗಿದೆ. ಸಮಾಜದ ಆರೋಗ್ಯದ ಮೇಲೆ ಇಂಥ ಪೂರ್ವಗ್ರಹಗಳ ಪರಿಣಾಮ ಏನು ಎಂಬುದನ್ನು ಚರ್ಚಿಸಿ .

೨. ಬರವಣಿಗೆಯ ರೂಢಿಗತ ಚೌಕಟ್ಟು ಸೃಜನಾತ್ಮಕ ಬರವಣಿಗೆ ಹೊರಹೊಮ್ಮಲು ಅನುಕೂಲಕರವೇ ಅಲ್ಲವೇ ಚರ್ಚಿಸಿ.

೩. ನಾವು ನೋಡುವ ಬಹಳಷ್ಟು ಬರವಣಿಗೆಗಳು ಏಕಮುಖ ನಿರೂಪಣೆಗಳುಳ್ಳವು - ಕೆಲವೇ ಕೆಲವು ವರ್ಗಗಳನ್ನು ಪ್ರತಿನಿಧಿಸುವಂಥವು ಎಂಬ ಸಂಶಯ ಎಂದಾದರೂ ಮೂಡಿದೆಯೇ ? ಸಮರ್ಥಿಸಿ.

**ಅನುವಾದ**:ಸ್ವಯಂಪ್ರಭಾ

**ಪರಿಶೀಲನೆ**: ಎಂ. ಜಿ. ಹೆಗಡೆ

*Language and Language Teaching* Volume 4 Number 1 Issue 7 January 2015